


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1411(1542)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್. ನಾಗರಾಜ್(ಸಂದೇಶ್ ನಾಗರಾಜ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

ವಿಷಯ : ಮೈಸೂರು ನಗರದ ರಿಂಗ್ ರಸ್ತೆಯಲ್ಲಿ ನಡೆದಿರುವ ಅಪರಾಧಗಳ ಬಗ್ಗೆ

(ಅ) ಮೈಸೂರು ನಗರದ ರಿಂಗ್ ರಸ್ತೆಯಲ್ಲಿ ಕಳೆದ ಎರಡು ವರ್ಷಗಳಿಂದ ನಡೆದಿರುವ ಅಪರಾಧ ಚಟುವಟಿಕೆಗಳು ಮತ್ತು ಅಪಘಾತಗಳ ಸಂಖ್ಯೆ ಎಷ್ಟು; (ಪ್ರಕರಣವಾರು ವಿವರ ಒದಗಿಸುವುದು)

(ಆ) ರಿಂಗ್ ರಸ್ತೆಯ ಮಧ್ಯದಲ್ಲಿ ಉದ್ದಕ್ಕೂ ಹೆಚ್ಚು ಪ್ರಕಾಶ ಬೀರುವ ವಿದ್ಯುತ್ ದೀಪಗಳನ್ನು (ಎಲ್ಇಡಿ/ಸೋಡಿಯಂ ವೇಪರ್) ಅಳವಡಿಸಿ, ಸಿಸಿ ಟಿವಿ ಕ್ಯಾಮರಾಗಳನ್ನು ಅಳವಡಿಸಿ ಅಪರಾಧ ಪ್ರಕರಣಗಳು ನಡೆಯದಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಳ್ಳಲಾಗುವುದೇ;

(ಇ) ರಸ್ತೆಯಲ್ಲಿ ಅಪಘಾತ ವಲಯಗಳನ್ನು ಗುರಿತಿಸಿ ವೈಜ್ಞಾನಿಕವಾದ ರೀತಿಯಲ್ಲಿ ರೋಡ್ ಹಂಪ್, ಸಿಗ್ನಲ್ ದೀಪ, ಸಂಚಾರ ಚಿಹ್ನೆಯ ಬೋರ್ಡ್‌ಗಳನ್ನು (ಸೈನ್ ಬೋರ್ಡ್) ಅಳವಡಿಸಲು ಕ್ರಮ ಜರುಗಿಸಲಾಗುವುದೇ?